# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 636 (706) |
| 2 | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್<br>(ವಿಧಾನ ಸಭೆಯಿಂದ ಚುನಾಯಿರಾದವರು) |
| 3 | ಉತ್ತರಿಸಬೇಕಾದ ದಿನಾಂಕ | : | 22-02-2022 |
| 4 | ಉತ್ತರಿಸುವ ಸಚಿವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಕರ್ನಾಟಕ ನಗರ ಮೂಲ ಸೌಲಭ್ಯ ಅಭಿವೃದ್ಧಿ ಹಣಕಾಸು ಸಂಸ್ಥೆ (KUIDFC) ವತಿಯಿಂದ ಕಳೆದ 3 ವರ್ಷಗಳಲ್ಲಿ ಕೈಗೊಂಡ ಅಭಿವೃದ್ಧಿ ಕಾಮಗಾರಿಗಳು ಯಾವುವು; ಹಾಗೂ ಈ ಅಭಿವೃದ್ಧಿ ಕಾಮಗಾರಿಗಳಿಗಾಗಿ ಎಷ್ಟು ಮೊತ್ತವನ್ನು ವೆಚ್ಚ ಮಾಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | **ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮ (ಎನ್.ಕೆ.ಯು.ಎಸ್.ಐ.ಪಿ)**<br><br>ಕಳೆದ 3 ವರ್ಷಗಳಿಂದ ಯಾವುದೇ ಹೊಸ ಕಾಮಗಾರಿ ಅನುಮೋದನೆಗೊಂಡಿರುವುದಿಲ್ಲ. ಆದರೆ, ಹಿಂದಿನ ಸಾಲಿನಿಂದ ಮುಂದುವರೆದ ಕಾಮಗಾರಿ ಚಾಲ್ತಿಯಲ್ಲಿದ್ದು, ಸದರಿ ಪಟ್ಟಿಯನ್ನು **ಅನುಬಂಧ-1 ರಲ್ಲಿ** ಲಗತ್ತಿಸಿದೆ.<br><br>ಎನ್.ಕೆ.ಯು.ಎಸ್.ಐ.ಪಿ ಯೋಜನೆ 2008 ರಿಂದ 24 ನಗರ /ಪಟ್ಟಣಗಳಲ್ಲಿ ಮೂಲ ಭೂತ ಸೌಕರ್ಯ ಅಭಿವೃದ್ಧಿ ಕಾರ್ಯಕ್ರಮಗಳಾದ ನೀರು ಸರಬರಾಜು, ಒಳಚರಂಡಿ, ಮಳೆನೀರಿನ ಚರಂಡಿಗಳು, ರಸ್ತೆ ಅಭಿವೃದ್ಧಿ, ಕೊಳಚೆ ಪ್ರದೇಶ ಅಭಿವೃದ್ಧಿ, ಅಗ್ನಿಶಾಮಕ ಸೇವೆ, ಪ್ರವಾಸೋದ್ಯಮ ಅಭಿವೃದ್ಧಿ ಮತ್ತು ಕೆರೆ ಅಭಿವೃದ್ಧಿಯಂತಹ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಈ ಯೋಜನೆಯಡಿ ಒಟ್ಟು 130 ಪ್ಯಾಕೇಜುಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಇದರಿಡಿ 119 ಗುತ್ತಿಗೆಗಳು ಪೂರ್ಣಗೊಂಡಿದೆ. ಉಳಿದ 9 ಗುತ್ತಿಗೆಗಳು ಅನುಷ್ಠಾನದ ವಿವಧ ಹಂತದಲ್ಲಿದೆ. 2 ಕಾಮಗಾರಿ ಮೊಟಕುಗೊಳಿಸಿ ಗುತ್ತಿಗೆಯನ್ನು ರದ್ದುಪಡಿಸಿದೆ.<br><br>**ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್ - ಜಲಸಿರಿ)**<br><br>• ಕೆಯುಐಡಿಎಫ್‌ಸಿ ವತಿಯಿಂದ ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್ - ಜಲಸಿರಿ) ರಾಜ್ಯದ ಆಯ್ದ ಎಂಟು (8) ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ/ಕುಡಿಯುವ ನೀರು ಸರಬರಾಜು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• ಕ್ವಿಮಿಪ್ ಯೋಜನೆಯನ್ನು 2 ಟ್ರಾಂಚ್‌ಗಳಾಗಿ ವಿಂಗಡಿಸಲಾಗಿದ್ದು, ಟ್ರಾಂಚ್-1 (ದಾವಣಗೆರೆ) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ದಾವಣಗೆರೆ, ಹರಿಹರ, ರಾಣೆಬೆನ್ನೂರು ಮತ್ತು ಬ್ಯಾಡಗಿ ನಗರ/ಪಟ್ಟಣಗಳನ್ನು ಒಳಗೊಂಡಿರುತ್ತದೆ.<br>• ಟ್ರಾಂಚ್-2 (ಮಂಗಳೂರು) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ಮಂಗಳೂರು, ಪುತ್ತೂರು, ಉಡುಪಿ ಮತ್ತು ಕುಂದಾಪುರ ನಗರ/ಪಟ್ಟಣಗಳನ್ನು ಒಳಗೊಂಡಿರುತ್ತದೆ.<br><br>ಕ್ವಿಮಿಪ್ ಯೋಜನೆಯಲ್ಲಿ ಕಳೆದ 3 ವರ್ಷಗಳಲ್ಲಿ ಕೈಗೊಂಡ ಅಭಿವೃದ್ಧಿ ಕಾಮಗಾರಿಗಳು ಹಾಗೂ ವೆಚ್ಚ ಮಾಡಲಾದ ಜಿಲ್ಲಾವಾರು ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | **ವಿಶ್ವಬ್ಯಾಂಕ್ ನೆರವಿನ - ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ (ಕೆಯುಡಬ್ಲ್ಯೂಎಸ್‌ಎಂಪಿ)**<br><br>ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ – (ಕೆಯುಡಬ್ಲ್ಯೂಎಸ್‌ಎಂಪಿ) ಯಲ್ಲಿ ಬೆಳಗಾವಿ, ಕಲಬುರಗಿ ಮತ್ತು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗಳ ವ್ಯಾಪ್ತಿ ಪ್ರದೇಶಗಳಿಗೆ ವಿನ್ಯಾಸ-ನಿರ್ಮಾಣ- ಕಾರ್ಯಾಚರಣೆ- ವರ್ಗಾವಣೆ (DBOT) ಮಾದರಿಯಲ್ಲಿ ಪರಿಣಾಮಕಾರಿ ವೆಚ್ಚದೊಳಗೆ ನಿರಂತರ (24x7) ಒತ್ತಡ ಸಹಿತ ನೀರು ಸರಬರಾಜು ವ್ಯವಸ್ಥೆಯ ಸುಸ್ಥಿರ ಉನ್ನತ್ತೀಕರಣ ಯೋಜನೆಯನ್ನು ಅನುಷ್ಠಾನಗೊಳಿಸಲು ಮೆ॥ ಎಲ್ & ಟಿ ಲಿಮಿಟೆಡ್, ಚೆನ್ನೈ ರವರಿಗೆ ಜೂನ್ 2020 ರಲ್ಲಿ ಕಾರ್ಯಾದೇಶ ನೀಡಲಾಗಿರುತ್ತದೆ. |
| | | ಸದರಿ ಯೋಜನೆಯನ್ನು ವಿಶ್ವಬ್ಯಾಂಕ್ ನೆರವಿನೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದ್ದು, ವಿಶ್ವ ಬ್ಯಾಂಕಿನ ನೆರವು ಶೇ. 67% ರಷ್ಟು (ರೂ. 1209.00 ಕೋಟಿ) ಇರುತ್ತದೆ. ರಾಜ್ಯ ಸರ್ಕಾರದ ಪಾಲು ಶೇ.7 % ಹಾಗೂ ನಗರ ಸ್ಥಳೀಯ ಸಂಸ್ಥೆಗಳ ಪಾಲು ಶೇ 26% ರಾಗಿರುತ್ತದೆ.<br><br>ಕಾಮಗಾರಿಯ ವಿನ್ಯಾಸ ಮತ್ತು ಅನುಷ್ಠಾನ ಅವಧಿ ಐದು ವರ್ಷವಾಗಿದ್ದು, ನಂತರದ 7 ವರ್ಷಗಳ ಅವಧಿಯ ಕಾರ್ಯಾಚರಣೆ ಹಾಗೂ ನಿರ್ವಹಣೆ (ಒಟ್ಟು 12 ವರ್ಷಗಳು) ಯ ಜವಾಬ್ದಾರಿಯನ್ನು ವಿನ್ಯಾಸ-ನಿರ್ಮಾಣ- ಕಾರ್ಯಾಚರಣೆ-ವರ್ಗಾವಣೆ (DBOT) ಗುತ್ತಿಗೆದಾರರು ನಿರ್ವಹಿಸಬೇಕಿರುತ್ತದೆ.<br><br>ಹುಬ್ಬಳ್ಳಿ_ಧಾರವಾಡ ನಗರದಲ್ಲಿ ಯೋಜನೆಯ ಗುತ್ತಿಗೆ ಮೊತ್ತ ರೂ. 1206.97 ಕೋಟಿಗಳಾಗಿದ್ದು, ಹುಬ್ಬಳ್ಳಿ-ಧಾರವಾಡ ನಗರದ ಭಾಗಶಃ ಪ್ರದೇಶಗಳನ್ನು ದಿನಾಂಕ: 15.11.2021 ರಂದು ಯೋಜನಾ ನಿಯಮಾನುಸಾರ ಹಾಲಿ ನೀರು ಸರಬರಾಜು ವ್ಯವಸ್ಥೆಯನ್ನು ಹಸ್ತಾಂತರಿಸಲಾಗಿದ್ದು, ಉಳಿದ ಪ್ರದೇಶಗಳ ಹಸ್ತಾಂತರ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. 18.60 ಕಿ.ಮೀ ಕಚ್ಚಾ ನೀರಿನ ಮತ್ತು ಶುದ್ಧ ನೀರಿನ ಪೈಪ್‌ಲೈನ್ ಅಳವಡಿಸಲಾಗಿದ್ದು, ನೀರು ಶುದ್ದೀಕರಣ ಘಟಕಗಳು, ನೆಲ/ಮೇಲ್ಮಟ್ಟದ ನೀರು ಸಂಗ್ರಹಗಾರಗಳ ನಿರ್ಮಾಣ ಕಾರ್ಯಗಳು ಪ್ರಗತಿಯಲ್ಲಿರುತ್ತವೆ.<br><br>ಬೆಳಗಾವಿ ನಗರದಲ್ಲಿ ಯೋಜನೆಯ ಗುತ್ತಿಗೆ ಮೊತ್ತ ರೂ.804.13 ಕೋಟಿಗಳಾಗಿದ್ದು, ಗುತ್ತಿಗೆದಾರರಾದ ಮೆ॥ ಎಲ್&ಟಿ ರವರಿಗೆ ದಿನಾಂಕ: 25.06.2021 ರಂದು ಯೋಜನಾ ನಿಯಮಾನುಸಾರ ಹಾಲಿ ನೀರು ಸರಬರಾಜು ವ್ಯವಸ್ಥೆಯನ್ನು ಹಸ್ತಾಂತರಿಸಲಾಗಿದೆ. 16.33 ಕಿ.ಮೀ ಕಚ್ಚಾ ನೀರಿನ ಮತ್ತು ಶುದ್ಧ ನೀರಿನ ಪೈಪ್‌ಲೈನ್ ಅಳವಡಿಸಲಾಗಿದ್ದು, ನೀರು ಶುದ್ದೀಕರಣ ಘಟಕಗಳು, ನೆಲ/ಮೇಲ್ಮಟ್ಟದ ನೀರು ಸಂಗ್ರಹಗಾರಗಳ ನಿರ್ಮಾಣ ಕಾರ್ಯಗಳು ಪ್ರಗತಿಯಲ್ಲಿರುತ್ತವೆ.<br><br>ಕಲಬುರಗಿ ನಗರಗದಲ್ಲಿ ಯೋಜನೆಯ ಗುತ್ತಿಗೆ ಮೊತ್ತ ರೂ. 837.43 ಕೋಟಿಗಳಾಗಿದ್ದು ಹಾಲಿ ನಿರ್ವಹಿಸುತ್ತಿರುವ ಸಂಪೂರ್ಣ ನೀರು ಸರಬರಾಜು ವ್ಯವಸ್ಥೆಯನ್ನು ಕೆಯುಬ್ಲ್ಯೂಎಸ್&ಡಿಬಿ ವತಿಯಿಂದ ಹಿಂಪಡೆದು ಸಂಬAಧಪಟ್ಟ ಮಹಾನಗರ ಪಾಲಿಕೆಗಳ ಮುಖಾಂತರ ಗುತ್ತಿಗೆದಾರರಾದ ಮೆ॥ ಎಲ್&ಟಿ ರವರಿಗೆ ಕ್ರಮವಾಗಿ ದಿನಾಂಕ: 08.07.2021 ರಂದು ಹಸ್ತಾಂತರಿಸಲಾಗಿದೆ. ಸರ್ವೆ ಕಾರ್ಯಗಳು ಮುಕ್ತಾಯಗೊಂಡಿದ್ದು, ಯೋಜನೆಯ ವಿನ್ಯಾಸ ಪ್ರಗತಿಯಲ್ಲಿರುತ್ತದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|

ಸದರಿ ಯೋಜನಾ ವ್ಯಾಪ್ತಿಯ 3 ಪಟ್ಟಣಗಳಿಗೆ ಕಳೆದ ಮೂರು ವರ್ಷದಲ್ಲಿ, 2019-20ನೇ ಸಾಲಿನಿಂದ 2021-22 ಸಾಲಿನವರೆಗೆ ಒಟ್ಟು 446.78 ಕೋಟಿ ರೂ ಗಳ ಅನುದಾನ ರಾಜ್ಯಸರ್ಕಾರ ಬಿಡುಗಡೆ ಮಾಡಿದ್ದು. ಈ ಪೈಕಿ 361.84 ಕೋಟಿ ರೂ ಗಳು ಈವರೆಗೆ ವೆಚ್ಚವಾಗಿರುತ್ತದೆ.

ಸದರಿ ಯೋಜನೆಯು ಜೂನ್-2020ರಂದು ಪ್ರಾರಂಭವಾಗಿದ್ದು, ಗುತ್ತಿಗೆ ಅವಧಿಯು 12 ವರ್ಷಗಳಾಗಿದ್ದು, 2032ಕ್ಕೆ ಅಂತಿಮಗೊಳ್ಳಲಿದೆ.

**ಕರ್ನಾಟಕ ಪೌರ ಸುಧಾರಣ ಯೋಜನೆಯ (ಕೆಎಮ್ಆರ್‌ಪಿ)**

ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ನಗರ ಮೂಲಸೌಕರ್ಯ ಮತ್ತು ಅಭಿವೃದ್ಧಿ ಹಣಕಾಸು ಸಂಸ್ಥೆ (ಕೆಯುಐಡಿಎಫ್‌ಸಿ) ವತಿಯಿಂದ ರಾಜ್ಯ ಸರ್ಕಾರದ ಅನುದಾನದಲ್ಲಿ ಮುಂದುವರೆದ ಕೆಎಂಆರ್‌ಪಿ ಯೋಜನೆಯಡಿ ತಿಪಟೂರು ನಗರದ ಹಂತ-2 ರ ಒಳಚರಂಡಿ ಕಾಮಗಾರಿಯನ್ನು (ರೂ.25 ಕೋಟಿ) ಹಾಗೂ ಕೊಳ್ಳೇಗಾಲ ನಗರದಲ್ಲಿ 24/7 ನಿರಂತರ ನೀರು ಸರಬರಾಜು ಯೋಜನೆಯನ್ನು (ರೂ.54 ಕೋಟಿ) ಮೊತ್ತದಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರದಿಂದ ಅನುಮೋದನೆ ನೀಡಲಾಗಿರುತ್ತದೆ. ಕಾಮಗಾರಿಯ ವಿವರ ಈ ಕೆಳಕಂಡಂತಿವೆ:

| ಕ್ರ. ಸ. | ಜಿಲ್ಲಾ ಹೆಸರು | ಯೋಜನಾ ಪಟ್ಟಣ | ಕೈಗೊಂಡ ಕಾಮಗಾರಿ | ಪ್ರಸ್ತುತ/ಷರಾ |
|---|---|---|---|---|
| 1. | ತುಮಕೂರು | ತಿಪಟೂರು | ಹಂತ-2ರ ಒಳಚರಂಡಿ ಯೋಜನೆ | ಕಾಮಗಾರಿಯನ್ನು ರೂ.24.15 ಕೋಟಿ ಮೊತ್ತಕ್ಕೆ ಗುತ್ತಿಗೆ ನೀಡಿದ್ದು, ರೂ. 23.61 ಕೋಟಿ ವೆಚ್ಚವಾಗಿರುತ್ತದೆ. ಕಾಮಗಾರಿಯು ದಿನಾಂಕ:31.03.2021 ರಂದು ಪೂರ್ಣಗೊಂಡಿರುತ್ತದೆ |
| 2. | ಚಾಮರಾಜನಗರ | ಕೊಳ್ಳೇಗಾಲ | ನಿರಂತರ ನೀರು ಸರಬರಾಜು ಕಾಮಗಾರಿ | ಯೋಜನೆಯ ಗುತ್ತಿಗೆ ಮೊತ್ತ 65.91 ಕೋಟಿ ಮೊತ್ತಕ್ಕೆ (ಸ್ಥಳೀಯ ಸಂಸ್ಥೆಯ ಮೂಲಕ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ರೂ.10.85 ಕೋಟಿ ಒಳಗೊಂಡು) ದಿನಾಂಕ: 25.4.2019 ರಂದು ಗುತ್ತಿಗೆ ನೀಡಲಾಗಿದ್ದು, ಪ್ರಸ್ತುತ ಕಾಮಗಾರಿಯು ಪ್ರಗತಿಯಲ್ಲಿದೆ ಹಾಗೂ ದಿನಾಂಕ: 31.05.2022 ರೊಳಗೆ ಕಾಮಗಾರಿಗಳ ನಿರ್ಮಾಣ ಕಾರ್ಯ ಪೂರ್ಣಗೊಳ್ಳುವ ನಿರೀಕ್ಷೆಯಿದೆ. |

<table>
<tr><th>ಕ್ರ. ಸಂ.</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td></td><td></td><td>

**9 ಪಟ್ಟಣಗಳ ನೀರು ಸರಬರಾಜು ಯೋಜನೆ**

- ಕರ್ನಾಟಕ ಸರ್ಕಾರವು ಪರಿಷ್ಕೃತ ಸರ್ಕಾರಿ ಆದೇಶ ಸಂಖ್ಯೆ : ನ.ಅ.ಇ 14 ಪಿಆರ್‌ಜೆ 2012, ಬೆಂಗಳೂರು, ದಿನಾಂಕ 15.12.2017 ರಲ್ಲಿ 9 ಪಟ್ಟಣಗಳಿಗೆ ರೂ.205.87 ಕೋಟಿ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆ ಅನುಷ್ಠಾನಕ್ಕೆ ಮಂಜೂರಾತಿ ನೀಡಿದೆ.
- ನೀರು ಸರಬರಾಜು ಉನ್ನತೀಕರಣ ಯೋಜನೆಯ ಕಾಮಗಾರಿಯನ್ನು ಕರ್ನಾಟಕ ಸರ್ಕಾರದ ಶೇ. 50ರಷ್ಟು ಅನುದಾನ ಮತ್ತು ಶೇ. 50ರಷ್ಟು ಮಾರುಕಟ್ಟೆ ಸಾಲದಿಂದ ಅನುಷ್ಠಾನಗೊಳಿಸಲಾಗುತ್ತಿದೆ.
- ಕೆ.ಯು.ಐ.ಡಿ.ಎಫ್.ಸಿಯು 9 ಪಟ್ಟಣಗಳ ಯೋಜನೆಯಡಿಯಲ್ಲಿ ಕಳೆದ 3 ವರ್ಷಗಳಲ್ಲಿ ಹಾಲಿ ಇರುವ ಕುಡಿಯುವ ನೀರಿನ ಯೋಜನೆಯ ಉನ್ನತೀಕರಣ ಕಾಮಗಾರಿಯನ್ನು ಮುಲ್ಕಿ, ಕಂಪ್ಲಿ, ತೆಕ್ಕಲಕೋಟೆ, ಕೊಟ್ಟೂರು, ಮಹಾಲಿಂಗಪುರ, ತೇರದಾಳ, ಮುದಗಲ್, ಮುಂಡರಗಿ ಮತ್ತು ಕೆ.ಆರ್ ಪೇಟೆ ಪಟ್ಟಣಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ಕಳೆದ 3 ವರ್ಷಗಳಲ್ಲಿ ವೆಚ್ಚ ಮಾಡಲಾದ ಜಿಲ್ಲಾವಾರು ವಿವರಗಳನ್ನು **ಅನುಬಂಧ-3** ದಲ್ಲಿ ಲಗತ್ತಿಸಿದೆ.

</td></tr>
<tr><td>ಆ)</td><td>ಈ ಯೋಜನೆಯಡಿ ಪ್ರಸಕ್ತ ಸಾಲಿನಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ; ಅವು ಪ್ರಸ್ತುತ ಯಾವ ಹಂತದಲ್ಲಿದೆ?</td><td>

**ಕರ್ನಾಟಕ ಪೌರ ಸುಧಾರಣ ಯೋಜನೆಯ (ಕೆಎಮ್‌ಆರ್‌ಪಿ)**

ಪ್ರಸಕ್ತ ಸಾಲಿನಲ್ಲಿ ಕೊಳ್ಳೇಗಾಲ ನಗರದಲ್ಲಿ ಕಾಮಗಾರಿಯ ಅನುಷ್ಠಾನ ಮುಂದುವರೆದಿದ್ದು, ಕಾಮಗಾರಿಯ ಪ್ರಗತಿ ವಿವರ ಈ ಕೆಳಕಂಡಂತಿದೆ:

<table>
<tr><th colspan="2">ಭೌತಿಕ</th><th colspan="2">ಆರ್ಥಿಕ (ರೂ.ಕೋಟಿಗಳಲ್ಲಿ)</th><th rowspan="2">ಪ್ರಸ್ತುತ</th></tr>
<tr><th>ಗುರಿ</th><th>ಪ್ರಗತಿ</th><th>ಗುರಿ</th><th>ಪ್ರಗತಿ</th></tr>
<tr><td>ನೆಟ್‌ವರ್ಕ್ ಜಾಲ-205 ಕಿ.ಮಿ</td><td>189 ಕಿ.ಮಿ</td><td rowspan="5">ನಿರ್ಮಾಣಕ್ಕಾಗಿ ರೂ.55.06 (ಸ್ಥಳೀಯ ಸಂಸ್ಥೆಯ ಮೂಲಕ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ರೂ.10.85 ಕೋಟಿ ಹೊರತುಪಡಿಸಿ)</td><td rowspan="5">35.01</td><td rowspan="5">ಸದರಿ ಕಾಮಗಾರಿಯು ಪೂರ್ಣಗೊಂಡ ನಂತರ 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ನಗರಸಭೆ ವತಿಯಿಂದ ನೀರಿನ ಕರ ಸಂಗ್ರಹಣೆ ಮೂಲಕ ಕೈಗೊಳ್ಳುವ ಗುರಿ ಹೊಂದಿದೆ</td></tr>
<tr><td>ಗೃಹ ಸಂಪರ್ಕಗಳು-16000 (ಸಂಖ್ಯೆ)</td><td>11900 ನಂ.</td></tr>
<tr><td>ಒಹೆಚ್‌ಟಿ-6 ನಂ-7.50ಕಿ.ಲಿ</td><td rowspan="3">ಪ್ರಗತಿಯಲ್ಲಿರುತ್ತವೆ</td></tr>
<tr><td>ಪಂಪ್‌ಹೌಸ್-1 (ಸಂಖ್ಯೆ)</td></tr>
<tr><td>ಪಂಪಗಳ ಬದಲಿ ಜೋಡಣೆ/ರಿಪೇರ್-4 (ಸಂಖ್ಯೆ)</td></tr>
</table>

</td></tr>
</table>

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಇ) | ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು? | ಕೆಯುಐಡಿಎಫ್‌ಸಿ ಯೋಜನೆಗಳ ವತಿಯಿಂದ ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನಲ್ಲಿ ಯಾವುದೇ ಕಾಮಗಾರಿಯನ್ನು ಕೈಗೊಂಡಿರುವುದಿಲ್ಲ. |

ಕಡತ ಸಂಖ್ಯೆ: ನಅಇ 36 ಪಿ.ಆರ್.ಜೆ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

ಏಷ್ಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ "ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮ" ದಡಿ ಕೈಗೊಂಡಿರುವ ಕಾಮಗಾರಿಗಳ ವಿವರ.

| ಕ್ರ ಸಂ. | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆ | ಕಾಮಗಾರಿ ಹೆಸರು | ಪರಿಷ್ಕೃತ ಗುತ್ತಿಗೆ ಮೊತ್ತ (ರೂ.ಕೋಟಿ) | ಗುತ್ತಿಗೆದಾರರ ಹೆಸರು | ಖರ್ಚು (ರೂ.ಕೋಟಿ) | | | ಷರಾ |
|---|---|---|---|---|---|---|---|---|---|
| | | | | | | 2019-20 | 2020-21 | 2021-22 | |
| 1 | ಹಾವೇರಿ | ಹಾವೇರಿ | ಒಳಚರಂಡಿ ವ್ಯವಸ್ಥೆ ಹಾಗೂ ಎಫ್ಎಎಲ್ ಮಾದರಿಯ ಎಸ್‌ಟಿಪಿ ನಿರ್ಮಾಣ ಮತ್ತು ಉಳಿಕೆ ಕಾಮಗಾರಿಗಳು (ಪ್ಯಾಕೇಜು-04ಹೆಚ್‌ವಿಆರ್02). | 18.06 | ಮೆ//ಗುರು ರಾಘವೇಂದ್ರ | 0.73 | 0.43 | 0.67 | ಕಾಮಗಾರಿ ಪೂರ್ಣಗೊಂಡಿದ್ದು, ದೋಷನಿವಾರಣಾ ಅವಧಿಯಲ್ಲಿರುತ್ತದೆ. ಕೆಲವು ಕೊಳವೆ ಸಂಪರ್ಕ ಹಾಗು ಎಸ್.ಟಿ.ಪಿ ಘಟಕದಲ್ಲಿ ಭಾರಿ ಮಳೆಯಿಂದ ಹಾನಿಗೊಳಗಾಗಿರುವ ದುರಸ್ತಿ ಸರಿಪಡಿಸುವ ಕಾಮಗಾರಿ ಬಾಕಿ ಇರುತ್ತದೆ. |
| 2 | | ಹಾವೇರಿ | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಹೆಚ್‌ವಿಆರ್01) | 38.07 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 3.85 | 1.44 | 0 | ಕಾಮಗಾರಿ ಪ್ರಗತಿಯಲ್ಲಿದೆ. |
| 3 | ಬೆಳಗಾವಿ | ನಿಪ್ಪಾಣಿ | ನೀರು ಸರಬರಾಜು ವ್ಯವಸ್ಥೆ ಸುಧಾರಣೆ ಕಾಮಗಾರಿ ಮತ್ತು ಸಂಬಂಧಿತ ಕಾಮಗಾರಿಗಳು - ಉಳಿಕೆ ಕಾಮಗಾರಿಗಳು (ಪ್ಯಾಕೇಜು-02ಎನ್‌ಪಿಎನ್01ಎ). | 5.87 | ಮೆ//ಆರ್ ಡಿ.ಕಿತ್ತೂರು | 0.63 | 0.41 | 0 | ಕಾಮಗಾರಿ ಪೂರ್ಣಗೊಂಡಿದೆ. |
| 4 | | ನಿಪ್ಪಾಣಿ | 24/7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಎನ್‌ಪಿಎನ್01) | 24.81 | ಮೆ//ಜೈನ್ ಇರಿಗೇಷನ್ಸ್ ಪ್ರೈ.ಲಿ | 0 | 1.21 | 0.94 | ಮೂಲ ಕಾಮಗಾರಿ ಪೂರ್ಣಗೊಂಡಿದ್ದು, ಕಾರ್ಯಚರಣೆ ಮತ್ತು ನಿರ್ವಹಣೆ ಹಂತದಲ್ಲಿದೆ. |
| 5 | ಬಾಗಲಕೋಟೆ | ರಬಕವಿ-ಬನಹಟ್ಟಿ | ಒಳಚರಂಡಿ ಜಾಲ ಮತ್ತು ಎಫ್.ಎ.ಎಲ್ ಮಾದರಿಯ 9.2 ಎಂ.ಎಲ್.ಡಿ ಎಸ್.ಟಿ.ಪಿ ನಿರ್ಮಾಣ (ಪ್ಯಾಕೇಜು-02ಆರ್‌ಬಿಕೆ02). | 43.50 | ಮೆ//ಅಕ್ವಾಟೆಕ್ ಲಕ್ಷ್ಮೀ (ಜೆವಿ) | 4.76 | 0 | 0 | ಕಾಮಗಾರಿ ಪೂರ್ಣಗೊಂಡಿದೆ. ಒಳಚರಂಡಿ ಮನೆ ಸಂಪರ್ಕವನ್ನು ನಗರಸಭೆವತಿಯಿಂದ ಕೈಗೊಂಡಿರುತ್ತಾರೆ. |
| 6 | | ಇಳಕಲ್ | ಎಫ್.ಎ.ಎಲ್ ಮಾದರಿ 8 ಎಂ.ಎಲ್.ಡಿ ಎಸ್.ಟಿ.ಪಿ ನಿರ್ಮಾಣ ಹಾಗೂ ಒಳಚರಂಡಿ ಜಾಲದ ಉಳಿಕೆ ಕಾಮಗಾರಿಗಳು (ಪ್ಯಾಕೇಜು-02ಐಎಲ್‌ಕೆ02). | 39.5 | ಮೆ//ಯುಪಿಎಲ್ ಎನ್ವಿರಾನ್‌ಮೆಂಟಲ್ ಇಂಜಿನೀಯರ್ಸ್ ಲಿಮಿಟೆಡ್. | 1.22 | 1.15 | 1.2 | ಕಾಮಗಾರಿ ಪೂರ್ಣಗೊಂಡಿದ್ದು, ಪ್ರಾಯೋಗಿಕ ಚಾಲನೆಯಲ್ಲಿದೆ. |

| ಕ್ರ ಸಂ. | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆ | ಕಾಮಗಾರಿ ಹೆಸರು | ಪರಿಷ್ಕೃತ ಗುತ್ತಿಗೆ ಮೊತ್ತ (ರೂ.ಕೋಟಿ) | ಗುತ್ತಿಗೆದಾರರ ಹೆಸರು | ಖರ್ಚು (ರೂ.ಕೋಟಿ) | | | ಷರ |
|---|---|---|---|---|---|---|---|---|---|
| | | | | | | 2019-20 | 2020-21 | 2021-22 | |
| 7 | ಗದಗ | ಗದಗ-ಬೆಟಗೇರಿ | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಜಿಡಿಜಿ01) | 85.76 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 8.44 | 1.22 | 3.99 | ಕಾಮಗಾರಿ ಪ್ರಗತಿಯಲ್ಲಿದೆ. |
| 8 | ಯಾದಗಿರಿ | ಯಾದಗೀರ್ | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ವೈಜಿಆರ್01). | 15.5 | ಮೆ//ವಿಶ್ವರಾಜ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿ. | 1.85 | 0.21 | 0.73. | ಕಾಮಗಾರಿ ಪ್ರಗತಿಯಲ್ಲಿದೆ |
| 9 | ಬಳ್ಳಾರಿ | ಬಳ್ಳಾರಿ | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಬಿಎಲ್‌ವೈ01). | 74.18 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 2.08 | 2.6 | 1.08 | ಕಾಮಗಾರಿ ಪ್ರಗತಿಯಲ್ಲಿದೆ |
| 10 | ವಿಜಯನಗರ | ಹೊಸಪೇಟೆ | ಒಳಚರಂಡಿ ವ್ಯವಸ್ಥೆ (ಪ್ಯಾಕೇಜು-01ಹೆಚ್‌ಪಿಟಿ02ಸಿ). | 13.97 | ಮೆ//ಕೃಷ್ಣ ಕನ್ಸ್ಟ್ರಕ್ಷನ್ಸ್ | 2.16 | 0.49 | 0.5 | ಕಾಮಗಾರಿ ಪ್ರಗತಿಯಲ್ಲಿದೆ. |
| 11 | | ಹೊಸಪೇಟೆ | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಹೆಚ್‌ಪಿಟಿ01) | 58.11 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 3.95 | 1.94 | 1.02 | ಕಾಮಗಾರಿ ಪ್ರಗತಿಯಲ್ಲಿದೆ |
| 12 | ರಾಯಚೂರು | ರಾಯಚೂರು | 24X7 ನಿರಂತರ ನೀರು ಸರಬರಾಜು ಕಾಮಗಾರಿ (ಪ್ಯಾಕೇಜು-04ಆರ್‌ಸಿಆರ್01) | 97.34 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 2.61 | 1.89 | 2.11 | ಕಾಮಗಾರಿ ಪ್ರಗತಿಯಲ್ಲಿದೆ |
| 13 | | ಸಿಂಧನೂರು | 24X7 ನಿರಂತರ ನೀರು ಸರಬರಾಜು ಕಾಮಗಾರಿ (04ಎಸ್‌ಎನ್‌ಡಿ01) | 99.00 | ಮೆ//ಎಸ್‌ಪಿಎಂಎಲ್ ಇನ್‌ಫ್ರಾಸ್ಟ್ರಕ್ಚರ್ಸ್ ಪ್ರೈ.ಲಿ. | 6.9 | 3.86 | 4.51 | ಕಾಮಗಾರಿ ಪ್ರಗತಿಯಲ್ಲಿದೆ |
| 14 | | ಸಿಂಧನೂರು | ಒಳಚರಂಡಿ ವ್ಯವಸ್ಥೆ ಹಾಗೂ ಎಸ್.ಟಿ.ಪಿ ನಿರ್ಮಾಣ (ಪ್ಯಾಕೇಜು-03ಎಸ್‌ಎನ್‌ಡಿ02) . | 61.25 | ಮೆ//ಯುಪಿಎಲ್ ಇಂಜಿನೀಯರ್ಸ್ ಲಿಮಿಟೆಡ್. | 9.52 | 2.66 | 1.45 | ಕಾಮಗಾರಿ ಪ್ರಗತಿಯಲ್ಲಿದೆ. |

ಕಾರ್ಯ ವ್ಯವಸ್ಥಾಪಕರು
(ಎನ್.ಕೆ.ಯು.ಎಸ್.ಐ.ಪಿ)

ಅನುಬಂಧ-2

ಟ್ರಾಂಚ್-1

| ಕ್ರ ಸಂ | ಜಿಲ್ಲೆ | ನಗರ/ಪಟ್ಟಣ | ಕಾಮಗಾರಿಯ ಹೆಸರು | ಗುತ್ತಿಗೆಯ ಮೊತ್ತ (ಕೋಟಿಗಳಲ್ಲಿ) | ಪ್ರಾರಂಭ ದಿನಾಂಕ | ಮುಕ್ತಾಯ ದಿನಾಂಕ | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ(ವೆಚ್ಚ) (ಕೋಟಿಗಳಲ್ಲಿ) |
|---|---|---|---|---|---|---|---|---|
| 1 | ದಾವಣಗೆರೆ | ದಾವಣಗೆರೆ | 24/7 ನೀರು ಸರಬರಾಜು ಕಾಮಗಾರಿ | 472.19 | 18.05.2018 | 31.01.2023 | 71.99% | 296.56 |
| 2 | ಹಾವೇರಿ | ರಾಣೆಬೆನ್ನೂರು | ಗಂಗಾಜಲ ದೊಡ್ಡಕೆರೆಯ ಪುನರುಜ್ಜೀವನ ಕಾಮಗಾರಿ | 29.83 | 05.09.2018 | 28.02.2022 | 98.45% | 24.29 |

ಟ್ರಾಂಚ್-2

| ಕ್ರ ಸಂ | ಜಿಲ್ಲೆ | ನಗರ/ಪಟ್ಟಣ | ಕಾಮಗಾರಿಯ ಹೆಸರು | ಗುತ್ತಿಗೆಯ ಮೊತ್ತ (ಕೋಟಿಗಳಲ್ಲಿ) | ಪ್ರಾರಂಭ ದಿನಾಂಕ | ಮುಕ್ತಾಯ ದಿನಾಂಕ | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ(ವೆಚ್ಚ) (ಕೋಟಿಗಳಲ್ಲಿ) |
|---|---|---|---|---|---|---|---|---|
| 1 | ಉಡುಪಿ | ಉಡುಪಿ | 24x7 ಕುಡಿಯುವ ನೀರು ಸರಬರಾಜು ಕಾಮಗಾರಿ | 107.08 | 16.11.2018 | 10.10.2022 | 45.89% | 52.25 |
| 2 | | | ಸಗಟು ನೀರು ಸರಬರಾಜು ಸುಧಾರಣಾ ಕಾಮಗಾರಿ (ವರಾಹಿ) | 117.89 | 23.08.2019 | 22.05.2022 | 60.85% | 75.79 |
| 3 | | ಉಡುಪಿ | 45 MLD ನೀರು ಶುದ್ಧೀಕರಣ ಘಟಕ ನಿರ್ಮಾಣ | 50.80 | 31.05.2021 | 30.05.2023 | pile test ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. | 6.11 |
| 4 | ದಕ್ಷಿಣ ಕನ್ನಡ | ಪುತ್ತೂರು | 24x7 ಕುಡಿಯುವ ನೀರು ಸರಬರಾಜು ಕಾಮಗಾರಿ | 76.12 | 16.11.2018 | 10.06.2022 | 52.02% | 43.24 |
| 5 | | | 24x7 ಕುಡಿಯುವ ನೀರು ಸರಬರಾಜು ಕಾಮಗಾರಿ | 585.30 | 24.12.2019 | 24.08.2023 | 22.45% | 156.71 |
| 6 | | | ಹಾಲಿ ಒಳಚರಂಡಿ ಪಂಪಿಂಗ್ ಮ್ಯೆನ್ ಪೈಪಲೈನ್ ಬದಲಿ | 84.56 | 06.06.2018 | 27.07.2021 | 100% | 84.56 |

| ಕ್ರ ಸಂ | ಜಿಲ್ಲೆ | ನಗರ/ಪಟ್ಟಣ | ಕಾಮಗಾರಿಯ ಹೆಸರು | ಗುತ್ತಿಗೆಯ ಮೊತ್ತ (ಕೋಟಿಗಳಲ್ಲಿ) | ಪ್ರಾರಂಭ ದಿನಾಂಕ | ಮುಕ್ತಾಯ ದಿನಾಂಕ | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ(ವೆಚ್ಚ) (ಕೋಟಿಗಳಲ್ಲಿ) |
|---|---|---|---|---|---|---|---|---|
| 7 | ದಕ್ಷಿಣ ಕನ್ನಡ | ಮಂಗಳೂರು | ಒಳಚರಂಡಿ ವ್ಯವಸ್ಥೆಯ ಪುನರ್ ನಿರ್ಮಾಣ (ವಲಯ 3&5) | 41.84 | 28.01.2020 | 27.04.2022 | 8.75% | 0.94 |
| 8 | | | ಮಂಗಳೂರು ನಗರದ ವಲಯ 9,12&13 ಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವುದು. | 38.42 | 28.01.2020 | 27.04.2022 | 14.88% | 5.50 |
| 9 | | | ಸುರತ್ಕಲ್ ಒಳಚರಂಡಿ ವ್ಯವಸ್ಥೆಯ ಪುನಃಶ್ಚೇತನ ಮತ್ತು ಮಿಸ್ಸಿಂಗ್ ಲಿಂಕಗಳಿಗೆ ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವುದು. | 72.76 | 06.06.2018 | 31.05.2022 | 86.65% | 65.45 |
| 10 | | ಮಂಗಳೂರು | ಒಳಚರಂಡಿ ವ್ಯವಸ್ಥೆಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಮಗಾರಿ (ವಲಯ 1,4&7) ಮಂಗಳೂರು-2 | 52.96 | 06.03.2019 | 05.06.2022 | 30.32% | 15.36 |
| 11 | | | ಹಾಲಿ ಒಳಚರಂಡಿ ವ್ಯವಸ್ಥೆಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಮಗಾರಿ (ವಲಯ7) ಮಂಗಳೂರು-3 | 33.06 | 06.03.2019 | 05.06.2022 | 13.29% | 7.21 |
| 12 | | | ಸಗಟು ನೀರು ಸರಬರಾಜು ಕಾಮಗಾರಿ | 35.29 | 05.03.2019 | 31.05.2022 | 59.08% | 20.22 |

Jayamala P.
ಕಾರ್ಯಕಾರಿ ವ್ಯವಸ್ಥಾಪಕರು
ಕ್ವಿಮಿಪ್-ಕೆಯುಐಡಿಎಫ್‌ಸಿ,
ಬೆಂಗಳೂರು

ಅನುಬಂಧ - 3

**ಕರ್ನಾಟಕದ 9 ಪಟ್ಟಣಗಳಲ್ಲಿ ನೀರು ಸರಬರಾಜು ಯೋಜನೆಯ ಕಳೆದ 3 ವರ್ಷಗಳ ಮಾಹಿತಿ**

| ಕ್ರ. ಸಂ. | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆ | ಕಾಮಗಾರಿಯ ಗುತ್ತಿಗೆ ಮೊತ್ತ (ರೂ. ಕೋಟಿಗಳಲ್ಲಿ) | ಟೆಂಡರ್ ಗುತ್ತಿಗೆ ನೀಡಿದ ದಿನಾಂಕ | ಭೌತಿಕ ಪ್ರಗತಿ (%) | ಆರ್ಥಿಕ ಪ್ರಗತಿ (ರೂ. ಕೋಟಿಗಳಲ್ಲಿ) | | | ಕಾಮಗಾರಿಗಳ ವಿವರ |
|---|---|---|---|---|---|---|---|---|---|
| | | | | | | 2018-19 | 2019-20 | 2020-21 | |
| 1 | ಗದಗ | ಮುಂಡರಗಿ | 17.43 | 02.03.2018 | 21% | 1.45 | 0.33 | 1.23 | ಪ್ರಗತಿಯಲ್ಲಿರುತ್ತದೆ |
| 2 | ಬಳ್ಳಾರಿ | ತೆಕ್ಕಲಕೋಟೆ | 21.73 | 08.03.2018 | 48% | 4.66 | 0.84 | 1.37 | ಪ್ರಗತಿಯಲ್ಲಿರುತ್ತದೆ |
| 3 | ಬಳ್ಳಾರಿ | ಕೊಟ್ಟೂರು | 13.55 | 09.03.2018 | 42% | 1.06 | 1.64 | 1.85 | ಪ್ರಗತಿಯಲ್ಲಿರುತ್ತದೆ |
| 4 | ಬಾಗಲಕೋಟೆ | ಮಹಾಲಿಂಗಪುರ | 10.84 | 05.03.2018 | 90% | 1.32 | 1.53 | 1.37 | ಕಾಮಗಾರಿ ಪೂರ್ಣಗೊಂಡಿದ್ದು, ಟ್ರಯಲ್ ರನ್ ಪ್ರಗತಿಯಲ್ಲಿರುತ್ತದೆ |
| 5 | ಬಾಗಲಕೋಟೆ | ತೇರದಾಳ | 16.18 | 05.03.2018 | 40% | 2.06 | 0.98 | 1.30 | ಪ್ರಗತಿಯಲ್ಲಿರುತ್ತದೆ |
| 6 | ರಾಯಚೂರು | ಮುದಗಲ್ | 31.29 | 07.03.2018 | 27% | 3.26 | 1.81 | 0.47 | ಪ್ರಗತಿಯಲ್ಲಿರುತ್ತದೆ |
| 7 | ದಕ್ಷಿಣ ಕನ್ನಡ | ಮುಲ್ಕಿ | 15.14 | 17.01.2018 | 100% | 4.18 | 8.30 | 2.30 | ಟ್ರಯಲ್ ರನ್ ಪೂರ್ಣಗೊಂಡಿದ್ದು, ಪಣಂಬೂರ್ ಡಬ್ಲ್ಯೂ.ಟಿ.ಪಿ ಯಿಂದ 3 ಎಂ.ಎಲ್.ಡಿ ನೀರನ್ನು ಮಂಗಳೂರು ಮಹಾನಗರ ಪಾಲಿಕೆ ರವರು ಒದಗಿಸ ಬೇಕಾಗಿದೆ |
| 8 | ಬಳ್ಳಾರಿ | ಕಂಪ್ಲಿ | 23.19 | 13.03.2018 | 100% | 6.96 | 8.21 | 7.38 | ಕಾಮಗಾರಿ ಪೂರ್ಣಗೊಂಡಿದೆ. |
| 9 | ಮಂಡ್ಯ | ಕೆ.ಆರ್.ಪೇಟೆ | 17.00 | 14.08.2019 | 70% | - | 1.06 | 3.32 | ಪ್ರಗತಿಯಲ್ಲಿರುತ್ತದೆ |
| | | | **166.35** | | | **24.95** | **24.70** | **20.59** | |

ಕಾರ್ಯಕಾರಿ ವ್ಯವಸ್ಥಾಪಕರು (ಪ್ರಭಾರ),
9-ಪಟ್ಟಣಗಳು, ಕೆಯುಐಡಿಎಫ್‌ಸಿ, ಬೆಂಗಳೂರು.